




**(ಅವತೀರ್ಣ - ಮಕ್ಕಾದಲ್ಲಿ)**

| | |
|---|---|
| ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ | بِسۡمِ اللّٰهِ الرَّحۡمٰنِ الرَّحِيۡمِ○ |
| 1. ಅವರು ಮುಖ ಸಿಂಡರಿಸಿಕೊಂಡರು ಮತ್ತು ನಿರ್ಲಕ್ಷಿಸಿದರು- | عَبَسَ وَ تَوَلّٰٓىۙ ① |
| 2. ಅವರ ಬಳಿಗೆ ಆ ‘ಅಂಧನು’ ಬಂದುದಕ್ಕಾಗಿ.[1] | اَنۡ جَآءَهُ الۡاَعۡمٰىؕ ② |
| 3. ನಿಮಗೇನು ಗೊತ್ತು, ಬಹುಶಃ ಅವನು ತನ್ನನ್ನು ಸಂಸ್ಕರಿಸಿ ಕೊಳ್ಳಬಹುದು- | وَمَا يُدۡرِيۡكَ لَعَلَّهٗ يَزَّكّٰٓىۙ ③ |
| 4. ಅಥವಾ ಉಪದೇಶಕ್ಕೆ ಗಮನ ಕೊಡಬಹುದು. ಆ ಉಪದೇಶವು ಅವನ ಪಾಲಿಗೆ ಫಲಕಾರಿಯಾಗಲೂಬಹುದು. | اَوۡ يَذَّكَّرُ فَتَنۡفَعَهُ الذِّكۡرٰىؕ ④ |
| 5. ಯಾರು ನಿರ್ಲಕ್ಷ್ಯ ತೋರುತ್ತಾನೋ- | اَمَّا مَنِ اسۡتَغۡنٰىۙ ⑤ |
| 6. ಅವನ ಕಡೆಗಂತೂ ನೀವು ಗಮನ ಕೊಡುತ್ತೀರಿ. | فَاَنۡتَ لَهٗ تَصَدّٰىؕ ⑥ |
| 7. ಅವನು ತನ್ನನ್ನು ಸಂಸ್ಕರಿಸಿಕೊಳ್ಳದಿದ್ದರೆ ನಿಮ್ಮ ಮೇಲೆ ಅವನ ಹೊಣೆಯೇನಿದೆ? | وَمَا عَلَيۡكَ اَلَّا يَزَّكّٰىؕ ⑦ |
| 8. ತಾನಾಗಿಯೇ ನಿಮ್ಮ ಬಳಿಗೆ ಧಾವಿಸಿ ಬರುವವನು- | وَاَمَّا مَنۡ جَآءَكَ يَسۡعٰىۙ ⑧ |
| 9. ಮತ್ತು(ಅಲ್ಲಾಹನನ್ನು) ಭಯಪಡುತ್ತಿರುವವನು- | وَهُوَ يَخۡشٰىۙ ⑨ |

1. ನಂತರದ ಉದ್ಧರಣೆಗಳಿಂದ ತಿಳಿದು ಬರುವುದೇನೆಂದರೆ ಮುಖ ಸಿಂಡರಿಸಿಕೊಂಡವರು ಮತ್ತು ನಿರ್ಲಕ್ಷಿಸಿದವರು ಸ್ವತಃ ಪ್ರವಾದಿವರ್ಯರಾಗಿದ್ದಾರೆ(ಸ). ಇಲ್ಲಿ ಪ್ರಸ್ತಾಪಿಸಲಾಗಿರುವ ಕುರುಡ ವ್ಯಕ್ತಿ ಹ. ಖದೀಜಾರ(ರ) ಸೋದರತ್ತೆಯ ಮಗನಾದ ಹ. ಇಬ್ನ್ ಉಮ್ಮು ಮಕ್ತೂಮ್(ರ) ಆಗಿದ್ದಾರೆ. ಪ್ರವಾದಿವರ್ಯರು(ಸ) ಆಗ ಮಕ್ಕಾದ ದೊಡ್ಡ ದೊಡ್ಡ ಸರದಾರರಿಗೆ ಇಸ್ಲಾಮಿನ ಸಂದೇಶ ನೀಡುವುದರಲ್ಲಿ ನಿರತರಾಗಿದ್ದರು. ಅಷ್ಟರಲ್ಲಿ ಓರ್ವ ಅಂಧವ್ಯಕ್ತಿ ಬಂದು ಕೆಲವು ಪ್ರಶ್ನೆಗಳನ್ನು ಕೇಳಬಯಸಿದರು. ಪ್ರವಾದಿವರ್ಯರಿಗೆ(ಸ) ಆ ಸಂದರ್ಭದಲ್ಲಿ ಅವರ ಈ ಹಸ್ತಕ್ಷೇಪ ಅರೋಚಕವೆನಿಸಿತು.

| | |
|---|---|
| 10. ಅವನನ್ನು ನೀವು ಕಡೆಗಣಿಸುತ್ತೀರಿ. | فَاَنۡتَ عَنۡهُ تَلَهّٰى ۚ‏ ﴿١٠﴾ |
| 11. ಖಂಡಿತ ಅಲ್ಲ. ಇದೊಂದು ಉಪದೇಶವಾಗಿರುತ್ತದೆ.[2] | كَلَّاۤ اِنَّهَا تَذۡكِرَةٌ ۚ‏ ﴿١١﴾ |
| 12. ಇಷ್ಟವಿದ್ದವನು ಇದನ್ನು ಸ್ವೀಕರಿಸಲಿ. | فَمَنۡ شَآءَ ذَكَرَهٗ ۘ‏ ﴿١٢﴾ |
| 13-15. ಇದು ಗೌರವಾನ್ವಿತವಾದ, ಉನ್ನತ ಮಟ್ಟದ, ಪಾವನವಾದ[3] ಹೊತ್ತಗೆಗಳಲ್ಲಿ ಲಿಖಿತವಾಗಿದೆ- | فِىۡ صُحُفٍ مُّكَرَّمَةٍ ۙ‏ ﴿١٣﴾ مَّرۡفُوۡعَةٍ مُّطَهَّرَةٍ ۙ‏ ﴿١٤﴾ بِاَيۡدِىۡ سَفَرَةٍ ۙ‏ ﴿١٥﴾ |
| 16. ಮತ್ತು ಅವು ಮಾನ್ಯರಾದ ಶಿಷ್ಟಲಿಪಿಕಾರರ ಕೈಗಳಲ್ಲಿರುತ್ತವೆ.[4] | كِرَامٍ بَرَرَةٍ ؕ‏ ﴿١٦﴾ |
| 17. ಮಾನವನ ಮೇಲೆ ಶಾಪವಿರಲಿ![5] ಎಂತಹ ಕಠೋರ ಸತ್ಯ ಧಿಕ್ಕಾರಿಯವನು! | قُتِلَ الۡاِنۡسَانُ مَاۤ اَكۡفَرَهٗ ؕ‏ ﴿١٧﴾ |
| 18. ಅಲ್ಲಾಹನು ಇವನನ್ನು ಸೃಷ್ಟಿಸಿರುವುದು ಯಾವ ವಸ್ತುವಿನಿಂದ? | مِنۡ اَىِّ شَىۡءٍ خَلَقَهٗ ؕ‏ ﴿١٨﴾ |
| 19. ವೀರ್ಯದ ಒಂದು ಬಿಂದುವಿನಿಂದ. ಅಲ್ಲಾಹನು ಇವನನ್ನು ಸೃಷ್ಟಿಸಿದನು, ಆ ಬಳಿಕ ಇವನ ವಿಧಿಯನ್ನು ನಿಶ್ಚಯಿಸಿದನು,! | مِنۡ نُّطۡفَةٍ ؕ خَلَقَهٗ فَقَدَّرَهٗ ۙ‏ ﴿١٩﴾ |
| 20. ತರುವಾಯ ಇವನಿಗಾಗಿ ಜೀವನದ ಮಾರ್ಗವನ್ನು ಸುಗಮಗೊಳಿಸಿದನು, | ثُمَّ السَّبِيۡلَ يَسَّرَهٗ ۙ‏ ﴿٢٠﴾ |
| 21. ಅನಂತರ ಇವನಿಗೆ ಮರಣ ಕೊಟ್ಟನು ಮತ್ತು ಸಮಾಧಿಯೊಳಕ್ಕೆ ತಲಪಿಸಿದನು- | ثُمَّ اَمَاتَهٗ فَاَقۡبَرَهٗ ۙ‏ ﴿٢١﴾ |

2. ಅರ್ಥಾತ್- ಹಾಗೆಂದೂ ಮಾಡದಿರಿ. ದೇವನನ್ನು ಮರೆತು ತಮ್ಮ ಲೌಕಿಕ ಸ್ಥಾನಮಾನದ ಬಗ್ಗೆ ಮೈಮರೆತಿರುವ ಜನರಿಗೆ ವೃಥಾ ಪ್ರಾಮುಖ್ಯ ಕಲ್ಪಿಸದಿರಿ. ಇಸ್ಲಾಮಿನ ಬೋಧನೆ ಅದರ ಬಗ್ಗೆ ವಿಮುಖರಾಗುವವರಿಗೂ ಒತ್ತಾಯಪೂರ್ವಕವಾಗಿ ಸಮರ್ಪಿಸಬೇಕಾದಂತಹ ಸಾಧನವಲ್ಲ. ನಿಮಗೆ ಅವರಿಂದ ಏನೋ ಸ್ವಾರ್ಥಸಾಧಿಸಬೇಕಾಗಿದೆ, ಇವರು ವಿಶ್ವಾಸ ಕೈಗೊಂಡರೆ ನಿಮ್ಮ ಸಂದೇಶ ವೃದ್ಧಿಸುವುದು, ಅನ್ಯಥಾ ವಿಫಲವಾಗುವುದು ಎಂಬ ತಪ್ಪುಕಲ್ಪನೆಗೆ ಅವರು ಈಡಾಗುವಂತಹ ರೀತಿಯಲ್ಲಿ ಆ ದುರಹಂಕಾರಿಗಳನ್ನು ಇಸ್ಲಾಮಿನೆಡೆಗೆ ತರಲು ಪ್ರಯತ್ನಿಸುವುದು ನಿಮ್ಮ ಸ್ಥಾನಮಾನಕ್ಕೆ ಹೇಳಿಸಿದ್ದಲ್ಲ. ಸತ್ಯದ ಬಗ್ಗೆ ಇವರೆಷ್ಟು ನಿರಪೇಕ್ಷರಾಗಿದ್ದಾರೋ ಸತ್ಯವೂ ಅವನಿಂದ ಅಷ್ಟೇ ನಿರಪೇಕ್ಷವಾಗಿದೆ.
3. ಅರ್ಥಾತ್- ಎಲ್ಲಾ ಬಗೆಯ ಕಲಸುಮೇಲೋಗರದಿಂದ ಮುಕ್ತವಾಗಿವೆ. ಅವುಗಳಲ್ಲಿ ಸತ್ಯದ ನಿಷ್ಕಳಂಕ ಬೋಧನೆಗಳನ್ನು ನೀಡಲಾಗಿದೆ. ಯಾವುದೇ ರೀತಿಯ ಮಿಥ್ಯ ಮತ್ತು ದುಷ್ಟ ವಿಚಾರ-ಸಿದ್ಧಾಂತಗಳಿಗೆ ಆಸ್ಪದ ನೀಡಲಾಗಿಲ್ಲ.
4. ಅರ್ಥಾತ್- ಅಲ್ಲಾಹನ ನೇರವಾದ ಆದೇಶದನ್ವಯ ಕುರ್‌ಆನಿನ ಆ ಗ್ರಂಥಗಳನ್ನು ಬರೆಯುತ್ತಿದ್ದ ಮತ್ತು ಸಂರಕ್ಷಿಸುತ್ತಿದ್ದ ಹಾಗೂ ಪ್ರವಾದಿವರ್ಯರಿಗೆ(ಸ) ಅದನ್ನು ಯಥಾರೂಪದಲ್ಲಿ ತಲಪಿಸುತ್ತಿದ್ದ ದೇವಚರರು.
5. ಇಲ್ಲಿಂದ ಸತ್ಯದ ಬಗ್ಗೆ ನಿರಪೇಕ್ಷತೆ ಪ್ರದರ್ಶಿಸುತ್ತಿದ್ದ ಸತ್ಯನಿಷೇಧಿಗಳನ್ನುದ್ದೇಶಿಸಿ ನೇರವಾಗಿ ಕ್ರೋಧವನ್ನು ವ್ಯಕ್ತಪಡಿಸಲಾಗಿದೆ. ಇದಕ್ಕೆ ಮೊದಲು ಅಧ್ಯಾಯದ ಆರಂಭದಿಂದ 16ನೆಯ ಸೂಕ್ತದ ತನಕ ಪ್ರವಾದಿವರ್ಯರನ್ನುದ್ದೇಶಿಸಿ(ಸ) ಬೋಧನೆ ನೀಡಲಾಗಿದೆ ಮತ್ತು ಪರೋಕ್ಷವಾಗಿ ಸತ್ಯನಿಷೇಧಿಗಳ ಬಗ್ಗೆ ಕ್ರೋಧ ವ್ಯಕ್ತಪಡಿಸಲಾಗಿದೆ. "ಓ ಪ್ರವಾದಿಯೇ! ತಾವು ಸತ್ಯಾಪೇಕ್ಷಿಯೊಬ್ಬನನ್ನು ಬಿಟ್ಟು ಅದಾವ ಜನರ ಕಡೆಗೆ ಗಮನ ಹರಿಸುತ್ತಿದ್ದೀರಿ. ಅವರಾದರೋ ಸತ್ಯಸಂದೇಶದ ದೃಷ್ಟಿಕೋನದಿಂದ ನೋಡುವುದಾದರೆ ಯಾವುದೇ ನೆಲೆ-ಬೆಲೆ ಇಲ್ಲದವರಾಗಿದ್ದಾರೆ. ತಮ್ಮಂತಹ ಮಹಾನ್ ಪ್ರವಾದಿ ಕುರ್‌ಆನಿನಂತಹ ಉನ್ನತ ಸ್ತರದ ಸಾಧನವನ್ನು ಅವರ ಮುಂದಿಡುವಂತಹ ಉನ್ನತ ಸ್ಥಾನಮಾನವನ್ನು ಅವರು ಹೊಂದಿಲ್ಲ" ಎಂಬ ಧಾಟಿಯನ್ನು ಇಲ್ಲಿ ಅನುಸರಿಸಲಾಗಿದೆ.

| | |
|---|---|
| 22. ತರುವಾಯ ತಾನಿಚ್ಛಿಸಿದಾಗ ಇವನನ್ನು ಪುನಃ ಜೀವಂತ ಗೊಳಿಸುವನು. | ثُمَّ إِذَا شَآءَ أَنشَرَهُۥ ﴿٢٢﴾ |
| 23. ಖಂಡಿತ ಅಲ್ಲ, ಅಲ್ಲಾಹನು ಇವನಿಗೆ ಆಜ್ಞಾಪಿಸಿದ್ದ ಕರ್ತವ್ಯವನ್ನು ಇವನು ನೆರವೇರಿಸಲಿಲ್ಲ. | كَلَّا لَمَّا يَقْضِ مَآ أَمَرَهُۥ ﴿٢٣﴾ |
| 24. ಇನ್ನು, ಮನುಷ್ಯನು ತನ್ನ ಆಹಾರವನ್ನೊಮ್ಮೆ ನೋಡಲಿ- | فَلْيَنظُرِ ٱلْإِنسَٰنُ إِلَىٰ طَعَامِهِۦٓ ﴿٢٤﴾ |
| 25. ನಾವು ಧಾರಾಳವಾಗಿ ನೀರನ್ನು ಸುರಿಸಿದೆವು-[6] | أَنَّا صَبَبْنَا ٱلْمَآءَ صَبًّا ﴿٢٥﴾ |
| 26. ತರುವಾಯ ನೆಲವನ್ನು ವಿಚಿತ್ರ ರೀತಿಯಿಂದ ಸೀಳಿದೆವು. | ثُمَّ شَقَقْنَا ٱلْأَرْضَ شَقًّا ﴿٢٦﴾ |
| 27. ಅನಂತರ ಅದರೊಳಗೆ ಉತ್ಪಾದಿಸಿದೆವು ಧಾನ್ಯಗಳನ್ನು- | فَأَنۢبَتْنَا فِيهَا حَبًّا ﴿٢٧﴾ |
| 28. ದ್ರಾಕ್ಷೆ ಮತ್ತು ಹಸಿರು ತರಕಾರಿಗಳನ್ನು- | وَعِنَبًا وَقَضْبًا ﴿٢٨﴾ |
| 29. ಇಪ್ಪೆ ಮತ್ತು ಖರ್ಜೂರ- | وَزَيْتُونًا وَنَخْلًا ﴿٢٩﴾ |
| 30. ದಟ್ಟವಾದ ತೋಟಗಳನ್ನು- | وَحَدَآئِقَ غُلْبًا ﴿٣٠﴾ |
| 31. ತರತರದ ಹಣ್ಣು ಹಂಪಲುಗಳು ಮತ್ತು ಮೇವನ್ನು- | وَفَٰكِهَةً وَأَبًّا ﴿٣١﴾ |
| 32. ನಿಮಗಾಗಿಯೂ ನಿಮ್ಮ ಜಾನುವಾರುಗಳಿಗಾಗಿಯೂ ಜೀವನ ಸಾಧನಗಳ ರೂಪದಲ್ಲಿ. | مَّتَٰعًا لَّكُمْ وَلِأَنْعَٰمِكُمْ ﴿٣٢﴾ |
| 33. ಕೊನೆಗೆ ಕಿವಿಗಡಚಿಕ್ಕುವ ಆ ಧ್ವನಿ ಮೊಳಗುವಾಗ-[7] | فَإِذَا جَآءَتِ ٱلصَّآخَّةُ ﴿٣٣﴾ |
| 34. ಅಂದು ಮನುಷ್ಯನು ದೂರ ಓಡುವನು- ತನ್ನ ಸಹೋದರನಿಂದ- | يَوْمَ يَفِرُّ ٱلْمَرْءُ مِنْ أَخِيهِ ﴿٣٤﴾ |
| 35. ತನ್ನ ತಾಯಿಯಿಂದ ಮತ್ತು ತನ್ನ ತಂದೆಯಿಂದ- | وَأُمِّهِۦ وَأَبِيهِ ﴿٣٥﴾ |
| 36. ತನ್ನ ಪತ್ನಿಯಿಂದ ಮತ್ತು ತನ್ನ ಮಕ್ಕಳಿಂದ. | وَصَٰحِبَتِهِۦ وَبَنِيهِ ﴿٣٦﴾ |

6. ಅರ್ಥಾತ್- ಮಳೆ.
7. ಅಂದರೆ ಕೊನೆಯ ಬಾರಿ ಕಹಳೆಯೂದಿದಾಗ ಉಂಟಾಗುವ ಪ್ರಳಯಾತಂಕ ಶಬ್ದ. ಅದು ಮೊಳಗುತ್ತಲೇ ಸತ್ತು ಹೋದ ಮಾನವರೆಲ್ಲರೂ ಜೀವಂತಗೊಳಿಸಲ್ಪಟ್ಟು ಏಳುವರು.

| | |
|---|---|
| 37. ಅವರಲ್ಲಿ ಪ್ರತಿಯೊಬ್ಬನಿಗೂ ಅಂದು, ತನ್ನ ಹೊರತು ಬೇರೆ ಯಾರ ಪ್ರಜ್ಞೆಯೂ ಇಲ್ಲದಂತಹ ಪರಿಸ್ಥಿತಿ ಬಂದೊದಗುವುದು. | لِكُلِّ امْرِئٍ مِّنْهُمْ يَوْمَئِذٍ شَأْنٌ يُغْنِيهِ ﴿٣٧﴾ |
| 38. ಕೆಲವು ಮುಖಗಳು ಅಂದು ಕಾಂತಿಪೂರ್ಣವಾಗಿರುವುವು- | وُجُوهٌ يَوْمَئِذٍ مُّسْفِرَةٌ ﴿٣٨﴾ |
| 39. ಪ್ರಸನ್ನವಾಗಿಯೂ ಆನಂದ ತುಂದಿಲವಾಗಿಯೂ ಇರುವುವು. | ضَاحِكَةٌ مُّسْتَبْشِرَةٌ ﴿٣٩﴾ |
| 40. ಮತ್ತೆ ಕೆಲವು ಮುಖಗಳ ಮೇಲೆ ಅಂದು ಧೂಳು ಕವಿದಿರುವುದು- | وَوُجُوهٌ يَوْمَئِذٍ عَلَيْهَا غَبَرَةٌ ﴿٤٠﴾ |
| 41. ಮತ್ತು ಕಪ್ಪು ಕವಿದಿರುವುದು. | تَرْهَقُهَا قَتَرَةٌ ﴿٤١﴾ |
| 42. ಇವರೇ ದುಷ್ಕರ್ಮಿಗಳಾದ ಸತ್ಯನಿಷೇಧಿಗಳು. | أُولَٰئِكَ هُمُ الْكَفَرَةُ الْفَجَرَةُ ﴿٤٢﴾ |